ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಶುಕ್ರವಾರ, ದಿನಾಂಕ 19ನೇ ಜುಲೈ, 2019

ಲಿಂಗಧೀರನಹಳ್ಳಿ ಬಡಾವಣೆಯಲ್ಲಿ ಸಿ.ಎ. ನಿವೇಶನವನ್ನು ಬಿಡಿಎ ರಕ್ಷಿಸಿಕೊಳ್ಳದ ಬಗ್ಗೆ

ಶ್ರೀ ಆಯನೂರು ಮಂಜುನಾಥ್ (ಪದವೀಧರರ ಕ್ಷೇತ್ರ):-

358 (438) ಮಾನ್ಯ ಉಪ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ನೌಕರರ ಕ್ಷೇಮಾಭಿವೃದ್ಧಿ ಸಂಘಕ್ಕೆ ಲಿಂಗಧೀರನಹಳ್ಳಿ ಗ್ರಾಮದ ಸರ್ವೆ ನಂ. 1/4, 7/1,

7/5, 7/6, 7/8 & 7/9 ರಲ್ಲಿನ ಜಮೀನುಗಳನ್ನು ನೋಂದಾಯಿತ ಕ್ರಯಪತ್ರ ಮಾಡಿಕೊಡದೇ ಸದರಿ ಜಮೀನುಗಳನ್ನು ಪರಿಷ್ಕೃತ ಬಡಾವಣೆ ನಕ್ಷೆಯಲ್ಲಿ ಸೇರಿಸಲು ಅವಕಾಶವಿದೆಯೇ ; ಇಲ್ಲದಿದ್ದಲ್ಲಿ, ಈ ಅಕ್ರಮಕ್ಕೆ ಕಾರಣರಾದ ನೌಕರರ ವಿರುದ್ಧ ಕೈಗೊಂಡ ಕ್ರಮಗಳೇನು ;

(ಆ) ಪ್ರಾಧಿಕಾರದ ನಿಯಮಾವಳಿಗಳನ್ವಯ ಸಿ.ಎ. ನಿವೇಶನಗಳನ್ನು ಹಂಚಿಕೆ ಮಾಡಲು ಕೈಗೊಳ್ಳುವ ಪ್ರಕ್ರಿಯೆಯ ವಿಧಾನಗಳಾವುವು; (ನಿಯಮದ ಪ್ರತಿ ಒದಗಿಸುವುದು)

(ಇ) ಲಿಂಗಧೀರನಹಳ್ಳಿ ಬಡಾವಣೆಯ ಸುಮಾರು ಒಂದು ಎಕರೆ ವಿಸ್ತೀರ್ಣದ ಸಿ.ಎ. ನಿವೇಶನವನ್ನು ಯಾರಿಗೆ ಹಂಚಿಕೆ ಮಾಡಲಾಗಿದೆ; (ಪ್ರಾಧಿಕಾರದ ಮಂಡಳಿ ಸಭೆಯಲ್ಲಿ ಅನುಮತಿಸಿದ ಠರಾವಿನ ಪ್ರತಿ ಒದಗಿಸುವುದು ಮತ್ತು ಗುತ್ತಿಗೆ ಕರಾರುಪತ್ರ ಒದಗಿಸುವುದು)

(ಈ) ಸಿ.ಎ. ನಿವೇಶನವನ್ನು ಪರಿತ್ಯಜನ ಪತ್ರದ ಮೂಲಕ ಪ್ರಾಧಿಕಾರಕ್ಕೆ ನೋಂದಾಯಿಸಿ, ನಂತರ ಸಂಘದವರು ಖಾಸಗಿಯವರಿಗೆ 30 ವರ್ಷಗಳ ಗುತ್ತಿಗೆ ಕರಾರು ಪತ್ರವನ್ನು ನೋಂದಾಯಿಸಲು ಅವಕಾಶವಿದೆಯೇ ; ಇಲ್ಲದಿದ್ದಲ್ಲಿ, ಸಂಘದವರು ಗುತ್ತಿಗೆ ಕರಾರುಪತ್ರವನ್ನು ನೋಂದಾಯಿಸಿರುವುದು ನಿಜವೇ ; ನೋಂದಾಯಿಸಿದ್ದಲ್ಲಿ ಕೈಗೊಂಡಿರುವ ಕ್ರಮಗಳೇನು ;

(ಉ) ಸದರಿ ಬಡಾವಣೆಯ ಅಕ್ರಮಗಳ ಬಗ್ಗೆ ಪ್ರಾಧಿಕಾರದ ಜಾಗೃತದಳದ ಎಸ್.ಪಿ.ರವರು ತನಿಖಾ ವರದಿಯನ್ನು ಸಲ್ಲಿಸಿರುವುದು ನಿಜವೇ ; (ಪ್ರತಿ ಒದಗಿಸುವುದು) ಅಕ್ರಮಗಳಲ್ಲಿ ಭಾಗಿಯಾದವರ ವಿರುದ್ಧ ಕ್ರಿಮಿನಲ್ ಕೇಸ್ ದಾಖಲಿಸಬೇಕೆಂದು ಆಯುಕ್ತರು ಸೂಚಿಸಿರುವುದು ನಿಜವೇ ; ಇದ್ದಲ್ಲಿ ಕೈಗೊಂಡ ಕ್ರಮಗಳೇನು ?